# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1577 (1831) |
| ಸದಸ್ಯರ ಹೆಸರು | : | ಶ್ರೀ ಎಸ್. ನಾಗರಾಜ್ (ಸಂದೇಶ್ ನಾಗರಾಜ್) (ಸ್ಥಳೀಯ ಸಂಸ್ಥೆಗಳಿಂದ ಚುನಾಯಿತರಾದವರು) |
| ಉತ್ತರಿಸಬೇಕಾದ ದಿನಾಂಕ | : | 24.03.2020 |
| ಉತ್ತರಿಸಬೇಕಾದ ಸಚಿವರು | : | ನಗರಾಭಿವೃದ್ಧಿ ಸಚಿವರು |

| | ಪ್ರಶ್ನೆ | ಉತ್ತರ |
|---|---|---|
| ಅ) | ಮೈಸೂರು ನಗರದ ಪಾರಂಪರಿಕ ಕಟ್ಟಡಗಳಾದ ದೇವರಾಜ ಮಾರುಕಟ್ಟೆ ಮತ್ತು ಲ್ಯಾಂಡ್ಸ್‌ಡೌನ್ ಕಟ್ಟಡಗಳನ್ನು ನೆಲಸಮ ಮಾಡಿ ಹೊಸ ಕಟ್ಟಡ ನಿರ್ಮಿಸಲಾಗುವುದೇ;<br>ಈ ವಿಚಾರದಲ್ಲಿ ಘನ ಉಚ್ಚ ನ್ಯಾಯಾಲಯವು ನೀಡಿರುವ ತೀರ್ಪಿನ ಮುಖ್ಯಾಂಶಗಳೇನು; | **ದೇವರಾಜ ಮಾರುಕಟ್ಟೆ:**<br>ದೇವರಾಜ ಮಾರುಕಟ್ಟೆ ಕಟ್ಟಡವನ್ನು ಮರು ನಿರ್ಮಾಣ ಮಾಡಬೇಕೆಂದು ಮಹಾನಗರ ಪಾಲಿಕೆಯ ಕೌನ್ಸಿಲ್‌ನಲ್ಲಿ ಆಗಿರುವ ನಿರ್ಣಯದ ವಿರುದ್ಧ ಕೆಲವು ಅಂಗಡಿ ಬಾಡಿಗೆದಾರರು ರಾಜ್ಯ ಉಚ್ಚ ನ್ಯಾಯಾಲಯದಲ್ಲಿ ರಿಟ್ ಅರ್ಜಿ ಸಂಖ್ಯೆ: 60550/2016/ಸಿ/ಡಬ್ಲ್ಯೂ ಹಾಗೂ ಇತರೆ ಅರ್ಜಿಗಳನ್ನು ಸಲ್ಲಿಸಿರುತ್ತಾರೆ.<br>ಘನ ಉಚ್ಚ ನ್ಯಾಯಾಲಯವು ನೀಡಿರುವ ತೀರ್ಪಿನ ಮುಖ್ಯಾಂಶಗಳು ಈ ಕೆಳಕಂಡಂತಿರುತ್ತವೆ.<br>• ದೇವರಾಜ ಮಾರುಕಟ್ಟೆಯು ಪುರಾತತ್ವ, ವಸ್ತು ಸಂಗ್ರಹಾಲಯ ಮತ್ತು ಪರಂಪಾರಿಕ ಇಲಾಖೆಯಿಂದ ಅಧಿಸೂಚಿತ ಸಂರಕ್ಷಿತ ಕಟ್ಟಡವಲ್ಲ.<br>• ಮೈಸೂರು-ನಂಜನಗೂಡು ಸ್ಥಳೀಯ ಯೋಜನಾ ಪ್ರದೇಶ ಮಹಾಯೋಜನೆಯ-II-2031, ಪ್ರಕಾರ ಸದರಿ ಕಟ್ಟಡವನ್ನು ಪಾರಂಪರಿಕ ಕಟ್ಟಡ ಎಂದು ಪಟ್ಟಿ ಮಾಡಲಾಗಿದೆ.<br>• ಟಾಸ್ಕ್‌ಫೋರ್ಸ್ ತೀರ್ಮಾನವು ನಿಸ್ಸಂದೇಹವಾಗಿರುತ್ತದೆ.<br>• ದೇವರಾಜ ಮಾರುಕಟ್ಟೆಯನ್ನು ತೆರವುಗೊಳಿಸಲು ಕ್ರಮ ಕೈಗೊಳ್ಳುವ ಪೂರ್ವದಲ್ಲಿ ವಿಶೇಷ ಪಾರಂಪರಿಕ ಸಮಿತಿಯು ಮತ್ತೊಮ್ಮೆ ಪರಿಶೀಲನೆ ಮಾಡುವಂತೆ ನಿರ್ದೇಶಿಸುವುದು ಸೂಕ್ತವಾಗಿರುತ್ತದೆ.<br>• ಕಾರ್ಯಪಡೆ (TASK FORCE) ಯು ನೀಡಿರುವ ವರದಿಯು ಈಗಾಗಲೇ ಲಭ್ಯವಿದ್ದು, ನುರಿತ ಸಲಹೆಯನ್ನು ತಜ್ಞರಿಂದ ಪಡೆಯಲು ಸಮಿತಿಯು ಸ್ವತಂತ್ರವಾಗಿರುತ್ತದೆ. ಪ್ರಸಕ್ತ ವಿವಾದವನ್ನು ಸ್ಪಷ್ಟವಾಗಿರಿಸುವಂತೆ ಕ್ರಮವಹಿಸಿ ತ್ವರಿತಗತಿಯಲ್ಲಿ ತೀರ್ಮಾನವನ್ನು ತೆಗೆದುಕೊಳ್ಳ ಬೇಕಾಗಿರುತ್ತದೆ. |

| | | |
|---|---|---|
| | | ವಿಶೇಷ ಪಾರಂಪರಿಕ ಸಮಿತಿಯು ನೀಡುವ ಅಭಿಪ್ರಾಯಗಳು, ಬಾಡಿಗೆದಾರರಿಗೆ ಸಂಬಂಧಿಸಿದಂತೆ ಕಾನೂನಾತ್ಮಕ ಕ್ರಮಗಳನ್ನು ತೆಗೆದುಕೊಳ್ಳುವ ಆಯ್ಕೆಯನ್ನು ಪ್ರಾಧಿಕಾರಕ್ಕೆ (ಮಹಾನಗರಪಾಲಿಕೆ) ಮುಕ್ತವಾಗಿರಿಸಿದೆ.<br>• ಕಟ್ಟಡವನ್ನು ಪುನಶ್ಚೇತನ/ ತೆರವು/ ಮರುನಿರ್ಮಾಣದ ಬಗ್ಗೆ ತೀರ್ಮಾನವನ್ನು ವಿಶೇಷ ಪಾರಂಪರಿಕ ಸಮಿತಿಯು ಐತಿಹಾಸಿಕ/ಪಾರಂಪರಿಕ ಕಟ್ಟಡವನ್ನು ಸಂರಕ್ಷಣೆ ಮಾಡುವ ಬಗ್ಗೆ ಗಮನವಿರಿಸಿ, ಆದೇಶ ಹೊರಡಿಸಿದ ಮೂರು ತಿಂಗಳೊಳಗೆ ತೆಗೆದುಕೊಳ್ಳಲು ಸೂಚಿಸಿದೆ.<br>• ಮೈಸೂರು ಮಹಾನಗರಪಾಲಿಕೆಯು ಈ ಆದೇಶ ಹೊರಡಿಸಿದ 06 ತಿಂಗಳೊಳಗೆ ಪ್ರಕರಣವನ್ನು ಮುಕ್ತಾಯಗೊಳಿಸಲು ಕ್ರಮ ವಹಿಸುವುದು.<br><br>**ಲ್ಯಾಂಡ್ಸ್‌ಡೌನ್ ಕಟ್ಟಡ:**<br><br>ಲ್ಯಾಂಡ್ಸ್‌ಡೌನ್ ಕಟ್ಟಡವನ್ನು ಮರು ನಿರ್ಮಾಣ ಮಾಡಬೇಕೆಂದು ನಗರ ಪಾಲಿಕೆಯ ಕೌನ್ಸಿಲ್‌ನಲ್ಲಿ ನಿರ್ಣಯವಾಗಿರುತ್ತದೆ. ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ನಡೆದ ವಿಶೇಷ ಪಾರಂಪರಿಕ ಸಮಿತಿಯ ಸಭೆಯಲ್ಲಿ ಒಂದು ತಜ್ಞರ ಸಮಿತಿಯನ್ನು ರಚನೆ ಮಾಡಲಾಗಿದ್ದು, ಲ್ಯಾಂಡ್ಸ್‌ಡೌನ್ ಕಟ್ಟಡವು ಸಮಿತಿಯ ಪರಿಶೀಲನೆ ಹಂತದಲ್ಲಿರುತ್ತದೆ. |
| ಆ) | ಈ ಬಗ್ಗೆ ತಜ್ಞರು ವರದಿ ನೀಡಿದ್ದಾರೆಯೇ:<br>ಈ ಕಟ್ಟಡಗಳನ್ನು ಪರಂಪರೆಗೆ ಧಕ್ಕೆ ಬಾರದಂತೆ ದುರಸ್ತಿಗೊಳಿಸಿ ಮೂಲ ರೂಪದಲ್ಲಿಯೇ ಉಳಿಸಿ ಕೊಳ್ಳಲಾಗುವುದೇ<br>ಅಥವಾ<br>ಮೂಲ ಸ್ವರೂಪದಲ್ಲಿ ಪುನರ್ ನಿರ್ಮಿಸಲಾಗುವುದೇ:<br>ಈ ಬಗ್ಗೆ ಸರ್ಕಾರ ಕೈಗೊಂಡಿರುವ ಕ್ರಮಗಳೇನು? | **ದೇವರಾಜ ಮಾರುಕಟ್ಟೆ:**<br>• ನ್ಯಾಯಲಯದ ತೀರ್ಪಿನಂತೆ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ವಿಶೇಷ ಪಾರಂಪರಿಕ ಸಮಿತಿಯು ತಜ್ಞರ ಸಮಿತಿಯನ್ನು ರಚನೆ ಮಾಡಲಾಗಿದ್ದು, ತಜ್ಞರ ಸಮಿತಿಯ ಸಲಹೆಯಂತೆ ಕರ್ನಾಟಕ ಇಂಜಿನಿಯರಿಂಗ್ ಸಂಶೋಧನಾ ಕೇಂದ್ರ, ಕೃಷ್ಣರಾಜಸಾಗರ ಸಂಸ್ಥೆಯು ಕಟ್ಟಡವನ್ನು ಪರಿಶೀಲಿಸಿ, "ದೇವರಾಜ ಮಾರುಕಟ್ಟೆಯ ಕಟ್ಟಡವು ದೃಢತೆಯನ್ನು ಕಳೆದುಕೊಂಡಿದ್ದು, ಸಾರ್ವಜನಿಕರ ಉಪಯೋಗಕ್ಕೆ ಯೋಗ್ಯವಾಗಿರುವುದಿಲ್ಲವೆಂದು ಅಭಿಪ್ರಾಯ ನೀಡಿರುತ್ತಾರೆ."<br>• ತಜ್ಞರ ಸಮಿತಿಯು "ಹಾಲಿ ಇರುವ ಕಟ್ಟಡದ ಎತ್ತರಕ್ಕೆ ಸೀಮಿತವಾಗಿ ಪ್ರಸ್ತುತ ಪಾರಂಪರಿಕ ಶೈಲಿಯಲ್ಲಿಯೇ ವಿನ್ಯಾಸದಂತೆ ಹಾಗೂ ಮಾದರಿಯಲ್ಲಿ ಹೊಸದಾಗಿ ಕಟ್ಟಡದ ಪುನರ್ ನಿರ್ಮಾಣ ಕೈಗೊಳ್ಳಬಹುದು" ಎಂದು ವರದಿ |

| | | |
|---|---|---|
| | | ನೀಡಿರುತ್ತದೆ.<br>• ತಜ್ಞರ ಸಮಿತಿಯ ವರದಿಯಂತೆ ಕಟ್ಟಡವನ್ನು ಪುನರ್ ನಿರ್ಮಾಣ ಮಾಡಲು ಕೌನ್ಸಿಲ್ ಸಭೆಯ ನಿರ್ಣಯವಾಗಿರುತ್ತದೆ. ಈ ವಿಷಯದ ಕುರಿತು ಆದೇಶ ಕೋರಿ ದಿನಾಂಕ: 19-02-2020ರ ಪತ್ರದಲ್ಲಿ ಮಹಾನಗರ ಪಾಲಿಕೆಯಿಂದ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಲಾಗಿದ್ದು ಪರಿಶೀಲನೆಯಲ್ಲಿದೆ.<br><br>**ಲ್ಯಾಂಡ್ಸ್‌ಡೌನ್ ಕಟ್ಟಡ:**<br>ಲ್ಯಾಂಡ್ಸ್‌ಡೌನ್ ಕಟ್ಟಡಕ್ಕೆ ಸಂಬಂಧಿಸಿದಂತೆ ಕಟ್ಟಡವು ಸಮಿತಿಯ ಪರಿಶೀಲನೆ ಹಂತದಲ್ಲಿರುತ್ತದೆ. |

ನಅಇ 40 ಎಸಿಎಂ 2020 (ಇ)

(ಬಿ.ಎ. ಬಸವರಾಜ)
ನಗರಾಭಿವೃದ್ಧಿ ಸಚಿವರು